# ಕರ್ನಾಟಕ ಸರ್ಕಾರ

## ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 470 |
| ಸದಸ್ಯರ ಹೆಸರು | : | ಶ್ರೀ ಎನ್ ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾಗಿದ್ದ ದಿನಾಂಕ | : | 16.12.2021. |
| ಉತ್ತರಿಸಬೇಕಾಗಿದ್ದವರು | : | ಮಾನ್ಯ ಮುಖ್ಯಮಂತ್ರಿಯವರು |
| ಉತ್ತರಿಸುವವರು | : | ಪೌರಾಡಳಿತ ಮತ್ತು ಸಣ್ಣ ಕೈಗಾರಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸಚಿವರು |

| ಕ್ರ.ಸಂ. | ಪ್ರಶ್ನೆಗಳು | ಉತ್ತರ |
|---|---|---|
| ಅ | ಆಗಸ್ಟ್ 31, 2021ರವರೆಗೆ ರಾಜ್ಯದ ವಿವಿಧ ನಿಗಮ/ಮಂಡಳಿಗಳಲ್ಲಿ ಅನುಕಂಪದ ಆಧಾರದ ಮೇಲೆ ನೇಮಕ ಕೋರಿ ಎಷ್ಟು ಅರ್ಜಿಗಳು ಸಲ್ಲಿಕೆಯಾಗಿವೆ; ಈ ಪೈಕಿ ಎಷ್ಟು ಅರ್ಜಿಗಳು ಬಾಕಿ ಇವೆ; (ಸಂಪೂರ್ಣ ಮಾಹಿತಿ ನೀಡುವುದು) | ಮಾಹಿತಿಯನ್ನು ಅನುಬಂಧದಲ್ಲಿ ಲಗತ್ತಿಸಿದೆ. |
| ಆ | ನಿಗಮ/ಮಂಡಳಿಗಳಲ್ಲಿ ಅನುಕಂಪದ ಆಧಾರದ ಮೇಲೆ ನೇಮಕ ಮಾಡುವುದನ್ನು ತಡೆಹಿಡಿಯಲಾಗಿದೆಯೇ; ಹಾಗಿದ್ದಲ್ಲಿ ಕಾರಣಗಳೇನು; | ಪ್ರಸ್ತುತ ನಿಗಮ/ಮಂಡಳಿಗಳಲ್ಲಿ ಅನುಕಂಪದ ಆಧಾರದ ಮೇಲೆ ನೇಮಕ ಮಾಡುವುದನ್ನು ತಡೆಹಿಡಿಯಲಾಗಿರುವುದಿಲ್ಲ. |
| ಇ | ಮೃತ ನೌಕರ ಸೇವೆ ಸಲ್ಲಿಸುತ್ತಿದ್ದ ನಿಗಮ/ಮಂಡಳಿ ನಷ್ಟದಲ್ಲಿದ್ದಾಗ ಅನುಕಂಪದ ಆಧಾರದ ಮೇಲೆ ನೇಮಕ ಮಾಡಿಕೊಳ್ಳದಂತೆ ಸರ್ಕಾರ ಆದೇಶ ಹೊರಡಿಸಿದೆಯೇ; ಈ ರೀತಿ ಆದೇಶಿಸುವ ಮೂಲಕ ಸರ್ಕಾರ ತಾರತಮ್ಯ ಮಾಡಿದಂತಾಗುವುದಿಲ್ಲವೇ; | ಸಾರ್ವಜನಿಕ ಉದ್ದಿಮೆಗಳ ಇಲಾಖೆಯಿಂದ ಸಾರ್ವಜನಿಕ ಉದ್ದಿಮೆಗಳು ಅನುಕಂಪ ಆಧಾರಿತ ಹುದ್ದೆಗಳನ್ನು ನೇಮಕ ಮಾಡುವ ಸಂಬಂಧ ಯಾವುದೇ ನಿರ್ಬಂಧ ವಿಧಿಸಿರುವುದಿಲ್ಲ. ಕೆಲವು ಉದ್ದಿಮೆಗಳು ತಮ್ಮ ಹಂತದಲ್ಲಿಯೇ ಈ ರೀತಿ ನಿರ್ಬಂಧ ವಿಧಿಸಿರುವುದು ಸರ್ಕಾರದ ಗಮನಕ್ಕೆ ಬಂದಿದ್ದು, ಸಾರ್ವಜನಿಕ ಉದ್ದಿಮೆಗಳ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಎಲ್ಲಾ 60 ಉದ್ದಿಮೆಗಳಲ್ಲಿ ಅನುಕಂಪ ಆಧಾರಿತ ಹುದ್ದೆಗಳನ್ನು ನೇಮಕ ಮಾಡುವ ಕುರಿತು ಒಂದೇ ರೀತಿಯಲ್ಲಿ ನಿಯಮಗಳನ್ನು ಅನುಸರಿಸುವಂತೆ ಮಾರ್ಗಸೂಚಿಗಳನ್ನು ಸರ್ಕಾರದ ಆದೇಶ ಸಂಖ್ಯೆ:ಸಾಉಇ 46 ಎಆರ್‌ಯು 2019, ದಿನಾಂಕ: 21.12.2020 ರಲ್ಲಿ ಆದೇಶ ಹೊರಡಿಸಿದೆ. |

...2/-

| | | |
|---|---|---|
| ಈ | ರಾಜ್ಯದ ಇತರೆ ಇಲಾಖೆಗಳಲ್ಲಿ ಅನುಕಂಪದ ಆಧಾರದ ಮೇಲೆ ನೇಮಕ ಕೋರಿ ಅರ್ಜಿ ಸಲ್ಲಿಸಿದಾಗ ಮೃತ ನೌಕರನ ಮೂಲ ಇಲಾಖೆಯಲ್ಲಿ ಹುದ್ದೆಗಳು ಖಾಲಿ ಇಲ್ಲದ ಪಕ್ಷದಲ್ಲಿ ಅದೇ ಜಿಲ್ಲೆಯಲ್ಲಿ ಬೇರೆ ಇಲಾಖೆಯಲ್ಲಿ ಅಥವಾ ಅದೇ ಇಲಾಖೆಯಲ್ಲಿ ಅನುಕಂಪದ ಆಧಾರದ ಮೇಲೆ ನೇಮಕ ಮಾಡಲು ಅವಕಾಶ ನೀಡಿ, ನಿಗಮ/ಮಂಡಳಿ ವಿಚಾರದಲ್ಲಿ ಮಾತ್ರ ಈ ರೀತಿ ಆದೇಶ ಹೊರಡಿಸಲು ಕಾರಣಗಳೇನು; | ಮೃತ ನೌಕರರು ಕಾರ್ಯ ನಿರ್ವಹಿಸುತ್ತಿದ್ದ ಉದ್ದಿಮೆ/ನಿಗಮ/ಮಂಡಳಿ/ಸಂಸ್ಥೆಯಲ್ಲಿ, ಮೃತ ನೌಕರರ ಅವಲಂಬಿತ ಅರ್ಜಿದಾರರನ್ನು ನೇಮಕಾತಿ ಮಾಡಿಕೊಳ್ಳಲು ಖಾಲಿ ಹುದ್ದೆ ಲಭ್ಯವಿಲ್ಲದ ಸಂದರ್ಭದಲ್ಲಿ, ಸಾರ್ವಜನಿಕ ಉದ್ದಿಮೆಗಳ ಇಲಾಖೆಯ ವ್ಯಾಪ್ತಿಯಲ್ಲಿರುವ ಬೇರೆ ಉದ್ದಿಮೆ/ನಿಗಮ/ಮಂಡಳಿ/ಸಂಸ್ಥೆಯಲ್ಲಿ ಅನುಕಂಪದ ಆಧಾರದ ನೇಮಕಾತಿಗೆ ಮೀಸಲಿಟ್ಟಿರುವ ಹುದ್ದೆಗಳು ಖಾಲಿಯಿದ್ದಲ್ಲಿ ಅವಲಂಬಿತ ಅರ್ಜಿದಾರರು ಅಪೇಕ್ಷಿಸಿದಲ್ಲಿ, ಸರ್ಕಾರದ ಅನುಮೋದನೆ ಪಡೆದು ಅಂತಹ ಪ್ರಕರಣಗಳನ್ನು ಶೀಘ್ರವಾಗಿ ಇತ್ಯರ್ಥಗೊಳಿಸಲು ಕ್ರಮಕೈಗೊಳ್ಳುವ ಕುರಿತು ಸರ್ಕಾರದ ಆದೇಶ ಸಂಖ್ಯೆ:ಸಾಉಇ 46 ಎಆರ್‌ಯು 2019, ದಿನಾಂಕ: 21.12.2020 ರಲ್ಲಿ ಆದೇಶಿಸಲಾಗಿದೆ. |
| ಉ | ನಿಗಮ/ಮಂಡಳಿ ನಷ್ಟದಲ್ಲಿರಲು ಅಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳು ಕಾರಣಕರ್ತರಾಗುತ್ತಾರೆಯೇ; ಹೀಗಿರುವಾಗ, ಅನುಕಂಪದ ಆಧಾರದ ಮೇಲೆ ನೇಮಕ ಮಾಡಲು ಸರ್ಕಾರ ಕ್ರಮ ಕೈಗೊಳ್ಳುವುದೇ ; ಈ ಕುರಿತು ಎಷ್ಟು ಕಾಲಮಿತಿಯೊಳಗೆ ಸರ್ಕಾರ ಆದೇಶ ಹೊರಡಿಸಲಿದೆ? | ನಿಗಮ/ಮಂಡಳಿ ನಷ್ಟದಲ್ಲಿರಲು ಅಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳು ಕಾರಣಕರ್ತರಾಗುತ್ತಾರೆಂದು ಹೇಳಲಾಗುವುದಿಲ್ಲ. ಅನುಕಂಪದ ಆಧಾರದ ಮೇಲೆ ನೇಮಕ ಮಾಡುವ ಕುರಿತು ಸರ್ಕಾರದ ಆದೇಶ ಸಂಖ್ಯೆ:ಸಾಉಇ 46 ಎಆರ್‌ಯು 2019, ದಿನಾಂಕ: 21.12.2020 ರಂದು ಹೊರಡಿಸಲಾಗಿದೆ. |

**ಸಾಉಇ 27 ಎಲ್ ಸಿ ಯು 2021**

(ಎನ್. ನಾಗರಾಜು)(ಎಂಟಿಬಿ)
ಪೌರಾಡಳಿತ ಮತ್ತು ಸಣ್ಣ ಕೈಗಾರಿಕೆ ಹಾಗೂ
ಸಾರ್ವಜನಿಕ ಉದ್ದಿಮೆಗಳ ಸಚಿವರು